# ಏಕಲವ್ಯದ ಸಮಾಜ ವಿಜ್ಞಾನ ಕಾರ್ಯಕ್ರಮ- ಅಭ್ಯಾಸದ ಕುರಿತು ಒಂದು ಚಿಂತನೆ,

---- **ಅರವಿಂದ್ ಸರ್ದಾನ**

ಕಲಿಕಾರ್ಥಿಗಳಿಗಷ್ಟೇ ಅಲ್ಲದೆ ಶಿಕ್ಷಕರಲ್ಲೂ ಕೂಡಾ ಜ್ಞಾನವನ್ನು ಬಲಪಡಿಸುವಂತಹ ಪರಿಣಾಮಗಳುಳ್ಳ ಪ್ರಯೋಗದ ಬಗ್ಗೆ ಈ ಚಿಂತನಾರ್ಹ ಬರಹದಲ್ಲಿ ಲೇಖಕರು ವಿವರಿಸುತ್ತಾರೆ.

ಏಕಲವ್ಯದ ಸಮಾಜ ವಿಜ್ಞಾನ ಕಾರ್ಯಕ್ರಮವು (1985 - 2018) ಮಧ್ಯಪ್ರದೇಶದ ಮೂರು ಜಿಲ್ಲೆಗಳಲ್ಲಿನ 8 ಸರ್ಕಾರಿ ಶಾಲೆಗಳಲ್ಲಿ ಪ್ರಯತ್ನಿಸಿ ನೋಡಿದ ಒಂದು ಪರ್ಯಾಯವಾಗಿತ್ತು. ಈ ಪ್ರಯೋಗವು ಕೇವಲ ಪರ್ಯಾಯ ಪಠ್ಯಪುಸ್ತಕ ವಿನ್ಯಾಸದೊಂದಿಗೆ ಮಾತ್ರ ನಡೆದದ್ದಲ್ಲ, ಬದಲಿಗೆ ಒಂದು ಸಮಗ್ರತಾ ದೃಷ್ಟಿಕೋನದ ಪ್ರಯತ್ನವೊಂದರ ಭಾಗವಾಗಿ ಶಿಕ್ಷಕ ತರಬೇತಿ ಮತ್ತು ಮೌಲ್ಯಮಾಪನದ ಜೊತೆಗಿನ ಪ್ರಯೋಗವೂ ಆಗಿತ್ತು.

ಮಾದರಿಯನ್ನು ಸಜ್ಜುಗೊಳಿಸುವುದು

ನನ್ನ ಸಹೋದ್ಯೋಗಿಯಾದ ರಶ್ಮಿ ಅವರು ಲರ್ನಿಂಗ್ ಕರ್ವ್ ಪತ್ರಿಕೆಗೆ (ಆಗಸ್ಟ 2010) i ಬರೆದ ತಮ್ಮ ಲೇಖನದಲ್ಲಿ ಹೇಳಿದ ಮಾತೆಂದರೆ ಈ ಯೋಜನೆಯು, 'ಹೊಸ ಪಠ್ಯಪುಸ್ತಕಗಳನ್ನು ಅಧ್ಯಯನ ಮಾಡಿದ ಮಕ್ಕಳಿಂದ ಯಾವ ರೀತಿಯ ಗ್ರಹಿಕೆ ಮತ್ತು ಸಾಧನೆಯನ್ನು ನಿರೀಕ್ಷಿಸಬಹುದು ಎಂಬ ಬಗ್ಗೆ ಪ್ರಶ್ನೆಗಳನ್ನು ಎತ್ತುತ್ತದೆ. ಸಹಜವಾಗಿಯೇ ಇದು ಈ ಮಕ್ಕಳ ಮೌಲ್ಯಮಾಪನ ಮಾಡುವುದು ಹೇಗೆ, ಅವರು ಹೊಸ ವಿಷಯ ಮತ್ತು ಕಲಿಕೆಯ ವಿಧಾನವು ಅಪೇಕ್ಷಿಸುವ ಅವಶ್ಯಕ ಮಟ್ಟದ ಗ್ರಹಿಕೆಯ ಸ್ಪಷ್ಟತೆಯನ್ನು ಮತ್ತು ಕೌಶಲ್ಯ ಅಭಿವೃದ್ಧಿಯನ್ನು ಸಾಧಿಸಿದ್ದಾರೆಯೇ ಇಲ್ಲವೇ ಎಂಬುದರ ಕುರಿತು ಚರ್ಚೆಗೆ ಎಡೆ ಮಾಡಿಕೊಟ್ಟಿತು'.

ಹೀಗಾಗಿ ಕೇವಲ ಮಕ್ಕಳಿಗೆ ಮಾತ್ರವಲ್ಲದೆ ಅನುಭವದಿಂದ ಕಲಿಯುತ್ತಾ ಎಲ್ಲರಿಗೂ ಸೂಕ್ತವಾದ ಅಭ್ಯಾಸವನ್ನು ವಿಕಸನ ಮಾಡುವ ಪ್ರಯತ್ನವು ಕಾರ್ಯಕ್ರಮದಲ್ಲಿ ಅಡಕವಾಗಿತ್ತು. ಪ್ರಚಲಿತವಾಗಿದ್ದ ಕಂಠಪಾಠದ ಕಲಿಕೆಗೆ ಅತ್ಯುತ್ತಮವಾದ ಪ್ರತಿ ಮಾದರಿಯಾಗಿದ್ದ ಹೋಶಂಗಾಬಾದ್ ವಿಜ್ಞಾನ ಶಿಕ್ಷಣ ಕಾರ್ಯಕ್ರಮದ ii ಹೆಜ್ಜೆಗಳನ್ನು ಅನುಸರಿಸಿ ನಾವು ಆಯ್ಕೆಮಾಡಿಕೊಂಡ ತೆರೆದ ಪುಸ್ತಕದ ಪರೀಕ್ಷಾ ಮಾದರಿಯು ಸದಾ ಕಾಲ ನೆನಪಿಗೆ ಬರುತ್ತಿತ್ತು. ಈ ಒಂದು ರಾಚನಿಕ ಜ್ಞಾಪನೆಯು, ನಾವು ನಮಗೆ ನಿಗದಿಪಡಿಸಿಕೊಂಡಿದ್ದ, ಅನೇಕ ಸವಾಲುಗಳನ್ನು ಒಡ್ಡಿದ್ದ ಮತ್ತು ಊಹಿಸಲು ಕಷ್ಟವಾಗುತ್ತಿದ್ದ ಪಠ್ಯಕ್ರಮ ಉದ್ದೇಶಗಳ ಕುರಿತು ನಮ್ಮ ಗಮನವನ್ನು ಖಾತ್ರಿ ಪಡಿಸಿತು.

ತೆರೆದ ಪುಸ್ತಕ ಪರೀಕ್ಷೆಗಳು

1989ರಲ್ಲಿ ಎಂದರೆ ಇದು ಜಾರಿಯಾದ ಮೊದಲನೇ ವರ್ಷದಲ್ಲಿ ಘಟಿಸಿದ ಪ್ರಕರಣವೊಂದು ತೆರೆದ ಪುಸ್ತಕ ಪದ್ಧತಿಯು ಮುಂದಿಡುವ ಕೇಂದ್ರ ಸಾಂಸ್ಕೃತಿಕ ಸವಾಲನ್ನು ಮುನ್ನೆಲೆಗೆ ತಂದಿತು. ಪರೀಕ್ಷೆಗೆ ಕೆಲವು ದಿನಗಳ ಮುಂಚೆ ದೇವಾಸ್ ಜಿಲ್ಲೆಯ ಹಳ್ಳಿಯ ಶಾಲೆಯೊಂದರಲ್ಲಿ ಒಬ್ಬಾತ ಹುಡುಗನು ಸಮಾಜ ವಿಜ್ಞಾನದ ಶಿಕ್ಷಕರ ಬಳಿ ಸಾರಿ ಒಂದು ಕೋರಿಕೆಯನ್ನು ಮುಂದಿಟ್ಟನು:

'ಸರ್, ನೀವು ನಿಮ್ಮಲ್ಲಿರುವ ಪಠ್ಯಪುಸ್ತಕವನ್ನು ನನಗೆ ಸ್ವಲ್ಪ ಕಾಲ ಕೊಡಬಹುದೇ?'

' ಏನಂದೆ! ಇಡೀ ವರ್ಷ ಮುಗಿಯುತ್ತಾ ಬಂದಿದೆ, ನೀನು ನೋಡಿದರೆ ಪುಸ್ತಕವನ್ನೇ ಖರೀದಿಸಿಲ್ಲವೇ?'

'ಸರ್ ನನ್ನಿಂದ ಬಾಡಿಗೆಯನ್ನು ತೆಗೆದುಕೊಳ್ಳಿ' ಎಂದು ಆ ಹುಡುಗ ಕಣ್ಣು ಮಿಟುಕಿಸದೆ ಹೇಳಿದ.

' ಇದೊಳ್ಳೆ ತಮಾಷೆ ವಿಷಯ ಆಯ್ತಲ್ಲ!'

ಮೊದಲ ಕೆಲವು ವರ್ಷಗಳಲ್ಲಿ ನಾವು ಎದುರಿಸಿದ ಮುಖ್ಯ ಸವಾಲು ಇದೇ ಆಗಿತ್ತು. ಸಾಮಾನ್ಯವಾಗಿ ಸಮಾಜ ವಿಜ್ಞಾನಗಳಿಗೆ ಸಂಬಂಧಿಸಿದಂತೆ ಇದ್ದ ಪದ್ಧತಿ ಏನೆಂದರೆ, ಪಠ್ಯಪುಸ್ತಕದಲ್ಲಿನ ಕೆಲವೊಂದು ಭಾಗಗಳನ್ನು ಕಂಠಪಾಠ ಮಾಡಲು ಗುರುತು ಹಾಕಲಾಗುತ್ತಿತ್ತು ಮತ್ತು ಅದನ್ನೇ ಪರೀಕ್ಷೆಯಲ್ಲಿ ಬರೆಯಬೇಕಾಗುತ್ತಿತ್ತು. ಕೇಳುತ್ತಿದ್ದ ಪ್ರಶ್ನೆಗಳು ಯಾವಾಗಲೂ ಪಠ್ಯಪುಸ್ತಕದಿಂದಲೇ ಇರುತ್ತಿದ್ದವು. ಬೇರೆ ಇನ್ನಾವುದೇ ಪ್ರಶ್ನೆ ಬಂದರೆ ಅದು ಪಠ್ಯಕ್ರಮದಿಂದ ಹೊರಗಿನದ್ದು ಎಂದು ಮತ್ತು ಸಮರ್ಪಕವಲ್ಲವೆಂದು ಪರಿಗಣಿಸಲಾಗುತ್ತಿತ್ತು. ಇಂತಹ ಒಂದು ವಾತಾವರಣದಲ್ಲಿ ತೆರೆದಿಟ್ಟ ಪುಸ್ತಕದ ಪರೀಕ್ಷೆಯನ್ನು ಯಾವತ್ತೂ ಸಹ ಪಠ್ಯಪುಸ್ತಕದಿಂದ ಕಾಪಿ ಹೊಡೆಯಲು ಪರವಾನಗಿ ಎಂದೇ ಭಾವಿಸಲಾಗುತ್ತಿತ್ತು. ಕೆಲವು ವರ್ಷಗಳ ನಂತರ ವಿದ್ಯಾರ್ಥಿಗಳು

ಇದು ಅಷ್ಟು ಸುಲಭವಲ್ಲ ಎಂಬುದನ್ನು ಮನವರಿಕೆ ಮಾಡಿಕೊಳ್ಳಲಾರಂಭಿಸಿದರು. ಅವರು ಪಠ್ಯಪುಸ್ತಕವನ್ನು ಸರಿಯಾಗಿ ಓದಿಲ್ಲದಿದ್ದರೆ ಸುಮ್ಮನೆ ಪರೀಕ್ಷೆಯಲ್ಲಿ ಪಠ್ಯಪುಸ್ತಕದ ಹಾಳೆಗಳನ್ನು ತಿರುವಿ ಹಾಕುತ್ತಿದ್ದರು. ಅಥವಾ ಸಂಬಂಧಪಡದ ಯಾವುದೋ ಭಾಗಗಳನ್ನು ಕಾಪಿ ಮಾಡಿಬಿಡುತ್ತಿದ್ದರು. ಶಿಕ್ಷಕರಿಗೂ ಕೂಡಾ ಅನೇಕ ಮಂಡಳಿ ಪರೀಕ್ಷೆಗಳಾದ ಮೇಲಷ್ಟೇ ಮೌಲ್ಯಮಾಪನದ ವಿಶಾಲ ಗುರಿಗಳನ್ನು ಅಂತರ್ಗತ ಮಾಡಿಕೊಳ್ಳಲು ಸಾಧ್ಯವಾಯಿತು. ನಂತರ ನಡೆಯುವ ತರಬೇತಿ ಗೋಷ್ಠಿಗಳಲ್ಲಿ ಪಠ್ಯಪುಸ್ತಕದ ಒಂದು ನಿರ್ದಿಷ್ಟ ಭಾಗದಲ್ಲಿ ಉತ್ತರ ಸಿಗುವಂತಹ ಗ್ರಹಿಕೆಯ ಪ್ರಶ್ನೆಗಳಿಗೂ ಮತ್ತು ಉತ್ತರದ ಭಾಗಗಳು ಇಡೀ ಅಧ್ಯಾಯದ ಉದ್ದಕ್ಕೂ ಹರಡಿಕೊಂಡಿರುವಂತಹ ವಿಚಾರಶೀಲ ಪ್ರಶ್ನೆಗಳಿಗೂ ವ್ಯತ್ಯಾಸವನ್ನು ಗುರುತಿಸುವುದನ್ನು ಅಭ್ಯಾಸ ಮಾಡಿಸಲಾಯಿತು. ವಿಚಾರಪರತೆಯ ಅವಶ್ಯಕತೆ ಇರುವ ಪ್ರಶ್ನೆಗಳು ಅನೇಕ ವಿಧವಾಗಿರುತ್ತವೆ; ಉದಾಹರಣೆಗೆ, ಪಠ್ಯಪುಸ್ತಕದಲ್ಲಿ ಬೇರೆ ಬೇರೆ ಕಡೆ ಹರಡಿಕೊಂಡಿರುವ ಅಂಶಗಳನ್ನು ಗುರುತಿಸಿ ಅವುಗಳ ಸಾರಾಂಶವನ್ನು ಸಂಗ್ರಹಿಸುವಂಥವು, ಪರಿಸ್ಥಿತಿಗಳನ್ನು ಹೋಲಿಸುವಂಥವು, ಒಂದು ವಿಚಾರವನ್ನು ಅನ್ವಯಿಸುವಂತಹವು, ಒಂದು ಕಡೆ ಅನ್ವಯಿಸುವುದನ್ನು ಮತ್ತೊಂದು ಕಡೆಗೆ, ವರ್ಗಾಯಿಸಿ ಅನ್ವಯಿಸುವಂಥವು, ಅಭಿಪ್ರಾಯವನ್ನು ವ್ಯಕ್ತಪಡಿಸುವಂಥವು ಇತ್ಯಾದಿ. ದೃಶ್ಯಗಳಿಗೆ ಸಂಬಂಧಿಸಿದಂತಹ ಪ್ರಶ್ನೆಗಳನ್ನು ಅಂದರೆ ಅವು ಚಿತ್ರಗಳಾಗಿರಲಿ, ನಕ್ಷೆಗಳಾಗಿರಲಿ, ಕೋಷ್ಟಕಗಳಾಗಿರಲಿ, ಸಚಿತ್ರ ವಿವರಣೆಗಳಾಗಿರಲಿ ಅವುಗಳನ್ನು ಉತ್ತರಿಸುವಲ್ಲಿ ತೆರೆದ ಪುಸ್ತಕದ ಪದ್ಧತಿಯು ನಿಜವಾಗಿಯೂ ಸಹಾಯಕವಾಗುತ್ತಿತ್ತು.. ವಿಭಿನ್ನ ಅಧ್ಯಾಯಗಳಲ್ಲಿರುವ ದೃಶ್ಯಗಳನ್ನು ಹೋಲಿಸಿ ನೋಡುವುದು, ಚಿತ್ರಗಳಲ್ಲಿ ಹೊಸ ಅಂಶಗಳನ್ನು ಹುಡುಕುವುದು, ಅವುಗಳನ್ನು ಪ್ರಸ್ತುತ ಬದುಕಿನೊಂದಿಗೆ ಹೋಲಿಕೆ ಮಾಡುವುದು, ಹೀಗೆ ದೃಶ್ಯಗಳನ್ನು ಸುತ್ತುವರಿದಂತೆ ಹೊಸ ಹೊಸ ಪ್ರಶ್ನೆಗಳನ್ನು ಸೃಷ್ಟಿಸಲು ಅಗಾಧವಾದ ಸಾಧ್ಯತೆಗಳಿದ್ದವು. ತೆರೆದ ಪುಸ್ತಕದ ಪರೀಕ್ಷೆಯ ಮುಖ್ಯವಾದ ಅಂಶ ಇದೇ ಆಗಿತ್ತು ಮತ್ತು ಇದೇ ಆಗಿದೆ – ಹೊಸ ಪ್ರಶ್ನೆಗಳನ್ನು ವಿನ್ಯಾಸಗೊಳಿಸುವ ಸಾಮರ್ಥ್ಯವನ್ನು ಹೆಚ್ಚಿಸುವುದು ಮತ್ತು ಪಠ್ಯಪುಸ್ತಕದಲ್ಲಿರುವ ಪ್ರಶ್ನೆಗಳನ್ನು ಉಪಯೋಗಿಸದೆ ಇರುವುದು.

ಒಂದು ಉದಾಹರಣೆ : ಅಮೆರಿಕದಲ್ಲಿನ ಕೃಷಿ ಭೂಮಿಯ ಮಾಲೀಕರು, ನೂರಾರು ಎಕರೆಗಳಷ್ಟು ವಿಸ್ತಾರವಿರುವ ತಮ್ಮ ವ್ಯವಸಾಯ ಕ್ಷೇತ್ರದಲ್ಲಿ ಒಂದೇ ಒಂದು ಬೆಳೆಯನ್ನು ಬೆಳೆಯುತ್ತಾರೆ.

ಅ. ಪುಟ 24ರಲ್ಲಿರುವ ಚಿತ್ರದಲ್ಲಿ ಈ ವಿಷಯವನ್ನು ಹೇಗೆ ತೋರಿಸಲಾಗಿದೆ?

ಆ. ಅಂತಹ ವಿಶಾಲ ವ್ಯವಸಾಯ ಕ್ಷೇತ್ರದಲ್ಲಿ ಒಂದೇ ಒಂದು ಬೆಳೆಯನ್ನು ಬೆಳೆಯುವುದರ ಅನುಕೂಲತೆಗಳೇನು?

ಇದರ ಪರಿಣಾಮವು ಪರೀಕ್ಷೆಯ ಆಚೆಗೂ ಇತ್ತು ಮತ್ತು ಇದು ತರಗತಿಯಲ್ಲಿನ ಅಭ್ಯಾಸದ ಮೇಲೆ ಮತ್ತು ಪಠ್ಯಪುಸ್ತಕಗಳೊಂದಿಗೆ ವಿದ್ಯಾರ್ಥಿಗಳಿಗೆ ಇದ್ದ ಸಂಬಂಧದ ಮೇಲೆ ಪ್ರಭಾವವನ್ನು ಬೀರಲಾರಂಭಿಸಿತು. ಮಕ್ಕಳು ಒಂದು ಪುಟವಾದ ನಂತರ ಮತ್ತೊಂದು ಪುಟದಂತೆ ಓದುತ್ತಾ ಹೋದರು. ವಿವರಗಳನ್ನು ಗಮನಿಸಿದರು. ಪ್ರಶ್ನೆಗಳನ್ನು ಕೇಳಿದರು ಮತ್ತು ನಕ್ಷೆಗಳ ಮೇಲೆ ಭೂಮಿ ಮತ್ತು ಸಾಗರವನ್ನು ಗುರುತಿಸಿದರು. ನಮಗಂತೂ ಈ ಅನುಭವಗಳು, ಕೇವಲ ಜಾಗವನ್ನು ಭರ್ತಿ ಮಾಡಲಿಕ್ಕೆ ಚಿತ್ರಗಳು ಇರುವುದಿಲ್ಲ, ಅವು ಪಠ್ಯಪುಸ್ತಕದ ಅವಿಭಾಜ್ಯ ಅಂಗ ಎಂಬ ವಿಚಾರವನ್ನು ಶೈಕ್ಷಣಿಕವಾಗಿ ಬಲಪಡಿಸಿದವು. ಅಲ್ಲದೆ ಇದು ಅನೇಕ ಪುಟಗಳಿಗೆ ವಿಸ್ತರಿಸಿಕೊಂಡ ಅಧ್ಯಾಯಗಳನ್ನು ಕಥಾಚಿತ್ರ ಮಾಲಿಕೆಗಳು ಮತ್ತು ದೃಶ್ಯಗಳೊಂದಿಗೆ, ಹೆಚ್ಚು ಸೃಜನಶೀಲವಾಗಿ ವಿನ್ಯಾಸಗೊಳಿಸಲು ಅವಕಾಶ ನೀಡಿತು. ವಿಷಯ ವಸ್ತು ಮತ್ತು ಬೋಧನಾ ಶಾಸ್ತ್ರದ ಪ್ರಯೋಗಗಳನ್ನು ಸೃಜನಶೀಲ ರೀತಿಗಳಲ್ಲಿ ವಿಲೀನಗೊಳಿಸಲು ಸಾಧ್ಯವಾಯಿತು.ಹಳ್ಳಿಯ ಶಾಲೆಯೊಂದರ ನೆನಪುಗಳು ನನ್ನ ಮನಸ್ಸಿನಲ್ಲಿ ಗಾಢವಾಗಿ ಅಚ್ಚೊತ್ತಿವೆ. ಆ ಶಾಲೆಯ ಅಧ್ಯಾಪಕರು ನಿಯತವಾಗಿ ಒಂದು ನೀರಸವಾದ ಚಟುವಟಿಕೆಯನ್ನು ಮಾಡಿಸುತ್ತಿದ್ದರು. ಇದರ ಅವಶ್ಯಕತೆ ಏನು ಎಂಬ ಪ್ರಶ್ನೆ ನನ್ನಲ್ಲಿ ಮೂಡುತ್ತಿತ್ತು. ಒಂದು ಅಧ್ಯಾಯವನ್ನು ಆರಂಭಿಸುವ ಮುನ್ನ ಅವರು ವಿದ್ಯಾರ್ಥಿಗಳಿಗೆ, ಅಧ್ಯಾಯದಲ್ಲಿರುವ ಚಿತ್ರಗಳು, ವಿವರಣಾತ್ಮಕ ದೃಶ್ಯಗಳು, ಕೋಷ್ಟಕಗಳು, ಗ್ರಾಫ್ ಗಳು, ಹರಿವಿನ ರೇಖಾಚಿತ್ರಗಳು ಹೀಗೆ ಅಲ್ಲಿ ಕಣ್ಣಿಗೆ ಕಾಣುವಂತಹ ದೃಶ್ಯಗಳನ್ನೆಲ್ಲ ಪಟ್ಟಿ ಮಾಡಲು ಹೇಳುತ್ತಿದ್ದರು. ಹೀಗೆ ಅವನ್ನೆಲ್ಲ ಎಣಿಸಲು ಹೇಳುವ ಮೂಲಕ ಅವರು ಅವುಗಳ ಬಗ್ಗೆ ಗಮನಹರಿಸಲು ವಿದ್ಯಾರ್ಥಿಗಳಿಗೆ ನೆರವಾಗುತ್ತಿದ್ದರು ಎಂಬುದು ನನಗೆ ನಂತರ ಮನವರಿಕೆ ಆಯಿತು. ಮಕ್ಕಳಿಗೆ ಆಸಕ್ತಿ ಹುಟ್ಟಿಸುತ್ತಿದ್ದದ್ದು ಆ ಅಧ್ಯಾಯದಲ್ಲಿರುವ ದೃಶ್ಯ ಚಿತ್ರಗಳು. ಅವರು ಅತ್ಯಂತ ಆಶ್ಚರ್ಯದಿಂದ ಅಲ್ಲಿರುವ ನಕ್ಷೆಗಳು ಮತ್ತು ವಿವರಣಾತ್ಮಕ ಚಿತ್ರಗಳತ್ತ ನೋಡುತ್ತಿದ್ದರು. ಅವರ ಸುತ್ತಮುತ್ತಲಿನ ಪರಿಸರದಲ್ಲಿ

ಸಿಗುತ್ತಿದ್ದ ಮುದ್ರಿತವಾದ ಸಾಮಾಗ್ರಿಗಳು ಇವು ಮಾತ್ರ ಮತ್ತು ಈ ದೃಶ್ಯಗಳ ನಾವೀನ್ಯತೆಯು ಅವರ ಮನಸ್ಸಿಗೆ ಹಿಡಿಸುತ್ತಿತ್ತು ಎಂಬುದನ್ನು ನಾವು ನೆನಪಿನಲ್ಲಿಟ್ಟುಕೊಳ್ಳಬೇಕು. ಕೆಲವೊಮ್ಮೆ ಶಿಕ್ಷಕರು ಅಧ್ಯಾಯದಲ್ಲಿರುವ ಉಪಶೀರ್ಷಿಕೆಗಳತ್ತ ಕೂಡ ಅವರ ಗಮನವನ್ನು ಸೆಳೆದು ಆನಂತರ ಅವುಗಳಿಗೆ ತಮ್ಮದೇ ಆದ ಪರಿಚಯವನ್ನು ನೀಡುತ್ತಿದ್ದರು.

ಮುಕ್ತ ಉತ್ತರಗಳಿರುವ ಪ್ರಶ್ನೆಗಳು

ತೆರೆದ ಪುಸ್ತಕಗಳ ಮೌಲ್ಯಮಾಪನದ ಇನ್ನೊಂದು ಭಾಗವೆಂದರೆ ಮುಕ್ತ ಉತ್ತರವಿರುವ ಪ್ರಶ್ನೆಗಳು. ಕೆಲವೊಂದು ವಿಶಿಷ್ಟ ಪರಿಸ್ಥಿತಿಗಳಿಗೆ ಸಂಬಂಧಿಸಿದಂತೆ ಮಕ್ಕಳ ಅಭಿಪ್ರಾಯವನ್ನು ಕೇಳಲಾಗುತ್ತಿತ್ತು; ಉದಾಹರಣೆಗೆ, ನೀವು ವಿತ್ತ ಮಂತ್ರಿಗಳಾದರೆ ಸರ್ಕಾರದ ಆದಾಯವನ್ನು ಹೆಚ್ಚಿಸಬೇಕಾದಾಗ ನೀವು ಯಾವುದನ್ನು ಹೆಚ್ಚಿಸುತ್ತೀರಿ, ಉಪ್ಪಿನ ಮೇಲಿನ ತೆರಿಗೆಯನ್ನೋ ಅಥವಾ ಕಾರುಗಳ ಮೇಲೆ ಹಾಕುವ ತೆರಿಗೆಯನ್ನೋ? ಇಲ್ಲಿದ್ದ ವಿಚಾರವೆಂದರೆ, ಅವರು ತಮ್ಮ ಉತ್ತರವನ್ನು ಹೇಳುವುದು ಮಾತ್ರವಲ್ಲದೆ ಅದರ ಹಿಂದಿನ ಕಾರಣವನ್ನು ವಿವರಿಸಬೇಕೇ ಹೊರತು, ಅವರು ಪಠ್ಯಪುಸ್ತಕದಲ್ಲಿ ಏನಿದೆ ಎಂಬುದನ್ನು ಅಥವಾ ಶಿಕ್ಷಕರ ಅಭಿಪ್ರಾಯವೇನು ಎಂಬುದನ್ನು ಅನುಸರಿಸಿ ಉತ್ತರಿಸುವುದಿಲ್ಲ. ಈ ವಿಷಯವನ್ನು ಅಂತರ್ಗತ ಮಾಡಿಕೊಳ್ಳಲು ಸ್ವಲ್ಪ ಅಭ್ಯಾಸ ಬೇಕಾಯಿತು.

ಸವಾಲುಗಳು

ತೆರೆದ ಪುಸ್ತಕದ ಪರೀಕ್ಷೆಯ ಎದುರು ಎರಡು ಮುಖ್ಯವಾದ ಸವಾಲುಗಳಿದ್ದವು. ಮೊದಲನೆಯದು ಪಠ್ಯಪುಸ್ತಕಕ್ಕೆ ಸಂಬಂಧಿಸಿದಂತೆ ಹೊಸ ಪ್ರಶ್ನೆಗಳನ್ನು ರಚಿಸುವುದು, ಮತ್ತು ಅವು ಪಠ್ಯಪುಸ್ತಕದಲ್ಲಿ ಈಗ ಇರುವ ಪ್ರಶ್ನೆಗಳಿಗಿಂತ ಭಿನ್ನವಾಗಿರಬೇಕು. ಇದಕ್ಕೆ ಬಹಳ ಅಭ್ಯಾಸ ಅವಶ್ಯಕವಾಗಿದ್ದು, ಸಾಮಾನ್ಯವಾಗಿ ಇದು ಮಂಡಳಿ ಪರೀಕ್ಷೆಯ ಪ್ರಶ್ನೆ ಪತ್ರಿಕೆಗಳನ್ನು ತಯಾರಿಸುವ ಕಾರ್ಯಾಗಾರಗಳ ಭಾಗವಾಗಿರುತ್ತಿತ್ತು. ಆರಂಭದಲ್ಲಿ ಕಾಣಿಸಿಕೊಂಡ, 'ಇದು ಭೌತವಿಜ್ಞಾನಗಳಿಗೆ ಸಾಧ್ಯವಾಗುತ್ತದೆ, ಆದರೆ ಸಾಮಾಜಿಕ ವಿಜ್ಞಾನಗಳಿಗಲ್ಲ' ಎಂಬ ಹಿಂಜರಿಕೆಯನ್ನು ನಿವಾರಿಸಿಕೊಳ್ಳಲಾಯಿತು. ಇನ್ನೊಂದು ಸವಾಲೆಂದರೆ ಮಕ್ಕಳು ಪ್ರಶ್ನೆಗಳಿಗೆ ತಮ್ಮದೇ ಮಾತುಗಳಲ್ಲಿ ಉತ್ತರಿಸುವುದನ್ನು ಉತ್ತೇಜಿಸುವುದು ಮತ್ತು ಶಿಕ್ಷಕರು ಈ ಪ್ರಕ್ರಿಯೆಯ ಬಗ್ಗೆ ವಿಶ್ವಾಸವನ್ನು ಬೆಳೆಸಿಕೊಳ್ಳುವಂತೆ ಮಾಡುವುದು.ಮಂಡಳಿ ಪರೀಕ್ಷೆಗಳಾದ ಸಾಕಷ್ಟು ಕಾಲದ ನಂತರ ಮೌಲ್ಯಮಾಪನ ಮತ್ತು ಅಂಕಗಳನ್ನು ಹಾಕುವುದರೊಂದಿಗೆ ಯಾವುದೇ ಸಂಬಂಧವಿಲ್ಲದೆ ಮಕ್ಕಳ ಉತ್ತರ ಪತ್ರಿಕೆಗಳ ಮಾದರಿಯನ್ನು ಉಪಯೋಗಿಸಿಕೊಂಡು ನಾವು ಒಂದು ಕಾರ್ಯಾಗಾರವನ್ನು ಮಾಡಬೇಕು ಎಂದು ಪ್ರತಿಪಾದಿಸಿದ ಸಹೋದ್ಯೋಗಿಯೊಬ್ಬರ ಸಲಹೆಯಿಂದ 'ಧಾರ್ ಕಾರ್ಯಾಗಾರ'ವು ಹುಟ್ಟಿಕೊಂಡಿತು. ಮಕ್ಕಳು ಏನು ಉತ್ತರಿಸುತ್ತಿದ್ದಾರೆ ಮತ್ತು ಉತ್ತರಗಳ ಹಿಂದೆ ಇರುವ ಅವರ ಚಿಂತನಾ ಪ್ರಕ್ರಿಯೆಗಳು ಏನು ಎಂಬುದನ್ನು ಸಾಮೂಹಿಕವಾಗಿ ಪರೀಕ್ಷಿಸುವುದು ಇದರ ಹಿಂದಿದ್ದ ಉದ್ದೇಶ. ಇದು ಎಲ್ಲರಿಗೂ ಕೂಡ ಒಂದು ಸಮೃದ್ಧ ಅನುಭವವಾಯಿತು. ಒಮ್ಮೆ ನೀವು ವ್ಯಾಕರಣ ಮತ್ತು ವಾಕ್ಯ ರಚನೆಯ ದೋಷಗಳನ್ನು ಮತ್ತು ಸಮಸ್ಯೆಗಳನ್ನು ಉಪೇಕ್ಷಿಸಿ, ಅಂಕಗಳನ್ನು ಹಾಕಬೇಕೆಂಬ ಒತ್ತಡವಿಲ್ಲದೆ ನೋಡಲಾರಂಭಿಸಿದಾಗ ಮಕ್ಕಳ ಚಿಂತನಾ ಪ್ರಕ್ರಿಯೆಗಳು ಒಂದು ಸಮೃದ್ಧ ರೀತಿಯಲ್ಲಿ ಹೊರಹೊಮ್ಮಲಾರಂಭಿಸುವುದು ಕಂಡು ಬಂದು ಪ್ರತಿಯೊಬ್ಬರ ಮೇಲೂ ಪ್ರಭಾವವನ್ನು ಬೀರಲಾರಂಭಿಸಿತು. ಇದಲ್ಲದೆ ನಾವು ಉತ್ತರದಲ್ಲಿ ಒಂದು ನಿರ್ದಿಷ್ಟ ವಿನ್ಯಾಸವನ್ನು ಕಂಡು ಇದು ಹೇಗೆ ಹೊರಹೊಮ್ಮುತ್ತಿದೆ ಎಂದು ನಮ್ಮನ್ನೇ ಕೇಳಿಕೊಂಡಾಗ, ನಮ್ಮ ಪಠ್ಯದಲ್ಲಿರುವ ಶಕ್ತಿ ಮತ್ತು ದೌರ್ಬಲ್ಯಗಳೆರಡನ್ನೂ ನಾವು ಕಾಣಲಾರಂಭಿಸಿದೆವು. ಇದು ನಮಗೂ ಸಹ ಒಂದು ಕನ್ನಡಿಯಂತೆ ಕೆಲಸ ಮಾಡುತ್ತಾ, ಪಠ್ಯವನ್ನು ಪುನರ್ ರಚಿಸಲು ಮತ್ತು ಪರಿಷ್ಕರಿಸಲು ನಮಗೆ ಗಣನೀಯವಾಗಿ ನೆರವು ನೀಡಿತು. ತೆರೆದ ಪುಸ್ತಕದ ಪರೀಕ್ಷಾ ಪದ್ಧತಿಯ ಉದ್ದೇಶಗಳು ಒಂದು ಪರಿವರ್ತನಾಶೀಲ ಪಾತ್ರವನ್ನು ನಿರ್ವಹಿಸಿದವು. ಇದು ಶಿಕ್ಷಕರಿಗೆ, ವಿದ್ಯಾರ್ಥಿಗಳಿಗೆ ಮತ್ತು ಏಕಲವ್ಯ ತಂಡಕ್ಕೆ ಸ್ಪಷ್ಟವಾದ ಸೂಚನೆಯನ್ನು ನೀಡಿತು ಮತ್ತು ಸಮರ್ಪಕವಾದ ಸಂಕೇತಗಳನ್ನು ರವಾನಿಸಿತು. ಹಿಂತಿರುಗಿ ನೋಡಿದಾಗ ಮತ್ತು ಈ ಅನುಭವವನ್ನು ಶೈಕ್ಷಣಿಕ ಸಂಶೋಧನೆ ಮತ್ತು ತರಬೇತಿಯ ರಾಷ್ಟ್ರೀಯ ಮಂಡಳಿಯ (ಎನ್ಸಿಇಆರ್‌ಟಿ) ಅಥವಾ ಶೈಕ್ಷಣಿಕ ಸಂಶೋಧನೆ ಮತ್ತು ತರಬೇತಿಯ ರಾಜ್ಯ ಮಂಡಳಿಯ (ಎಸ್ಸಿಇಆರ್ಟಿ) ಪಠ್ಯಕ್ರಮ ಸುಧಾರಣೆಗಳೊಂದಿಗೆ ಹೋಲಿಸಿದಾಗ, ಅವರುಗಳ ಪ್ರಯತ್ನದಲ್ಲಿ ಈ ಅಂಶಗಳು ತಪ್ಪಿ ಹೋಗಿವೆ ಎಂಬುದನ್ನು ಕಾಣಲು ಸಾಧ್ಯವಾಗುತ್ತದೆ. ಪಠ್ಯಕ್ರಮದಲ್ಲಿ ಸುಧಾರಣೆ ಮಾಡಲು ಏನಾದರೂ

ಅವಕಾಶವಿದ್ದರೆ, ಆಗ ಆದ್ಯತೆಯ ಅನುಕ್ರಮವನ್ನು ಬದಲಿಸಿ, ಮೊದಲಿಗೆ ಮೌಲ್ಯಮಾಪನದಲ್ಲಿ ಬದಲಾವಣೆಗಳನ್ನು ತಂದು ನಂತರ ಪಠ್ಯಪುಸ್ತಕಗಳನ್ನು ಕೈಗೆತ್ತಿಕೊಳ್ಳಬೇಕು.

ಅಭ್ಯಾಸದಲ್ಲಿ ಮೌಖಿಕತೆಯ ಪ್ರಾಮುಖ್ಯತೆ

ತಮ್ಮ ಮಾತುಗಳಲ್ಲೇ ಉತ್ತರವನ್ನು ಬರೆಯಬೇಕು ಎಂಬುದರಲ್ಲಿರುವ ಒಳ್ಳೆಯ ಅಂಶವೆಂದರೆ, ಮೌಖಿಕವಾಗಿ ವಾದ ಮಾಡಲು ಕಲಿಯುವುದು. ಅಭ್ಯಾಸವೆಂಬುದು ಕೇವಲ ಬರೆಯುವ ರೂಪಕ್ಕೆ ಸೀಮಿತವಲ್ಲ. ಸುತ್ತಲೂ ಇದ್ದ ಒಂದು ಮೌಖಿಕವಾದ ಸಮಾಜದ ಸಹಜ ಶಕ್ತಿಯೇ ಇದಾಗಿತ್ತು. ಹೀಗಾಗಿ ಅಲ್ಲಿ ವಾದಗಳು ಸಮೃದ್ಧವಾಗಿದ್ದವು, ಪ್ರಶ್ನೆಗಳು ತೀಕ್ಷ್ಣವಾಗಿದ್ದವು ಮತ್ತು ನಿರ್ಭಯವಾಗಿ ಅಭಿಪ್ರಾಯಗಳನ್ನು ವ್ಯಕ್ತಪಡಿಸಲಾಗುತ್ತಿತ್ತು. ನಾವು ಅನೇಕ ರೀತಿಯಲ್ಲಿ ಈ ಸಾವಯವ ಸಾಮರ್ಥ್ಯಕ್ಕೆ ಮುಖಾಮುಖಿಯಾದೆವು.

Box

—----------

ಒಳನೋಟಗಳು

—----------------------------+---------------

ಮಕ್ಕಳು ಬರೆದ ಪತ್ರಿಕೆಗಳನ್ನು ವಿಶ್ಲೇಷಿಸಿದಾಗ ಕೆಲವು ಮುಖ್ಯ ಒಳನೋಟಗಳು ಸ್ಪಷ್ಟವಾಗಿ ಹೊರಹೊಮ್ಮಿದವು. ತಮ್ಮದೇ ಮಾತುಗಳಲ್ಲಿ ಬರೆಯುವ ಮತ್ತು ತಮ್ಮ ಅಭಿಪ್ರಾಯಗಳ ಕುರಿತು ವಾದ ಮಾಡಲು ಕಲಿಯುವ ಮಕ್ಕಳು ಒಂದು ಮಾದರಿ ಉತ್ತರವು ಆಗ್ರಹಿಸುವಂತಹ ಎಲ್ಲಾ ನಿರೀಕ್ಷಿತ ಅಂಶಗಳನ್ನು ಅವಶ್ಯಕವಾಗಿ ಒಳಗೊಂಡಿರುವುದಿಲ್ಲ ಎಂಬುದನ್ನು ನಾವು ಕಂಡುಕೊಂಡೆವು. ನಾವು ಬರವಣಿಗೆಯಲ್ಲಿ ತಮ್ಮ ವಾದಗಳನ್ನು ಮುಂದಿಡುವ ಅವರ ಸಾಮರ್ಥ್ಯವನ್ನು ಗಮನಿಸಬೇಕು ಮತ್ತು ಉತ್ತೇಜಿಸಬೇಕೇ ಹೊರತು, ಕೇವಲ ಎಲ್ಲಾ ಅಂಶಗಳನ್ನು ಅವರು ಹೇಳಿದ್ದಾರೆಯೇ ಇಲ್ಲವೇ ಎಂಬುದರ ಬಗ್ಗೆ ಮಹತ್ವ ಕೊಡಬಾರದು. ಅಭಿವ್ಯಕ್ತಿಯಲ್ಲಿ ಸಾಕಷ್ಟು ಮಟ್ಟಿಗೆ ವೈವಿಧ್ಯತೆ ಇರುತ್ತದೆ ಎಂಬುದನ್ನು ನಿರೀಕ್ಷಿಸಬೇಕು ಮತ್ತು ಮಾದರಿ ಉತ್ತರವನ್ನು ನಕಲು ಮಾಡುವುದಕ್ಕೆ ಬದಲಾಗಿ ಇದನ್ನು ಮೆಚ್ಚಿಕೊಳ್ಳಬೇಕು. ಯಾವುದೇ ವಿಷಯಕ್ಕೆ ಸಂಬಂಧಪಟ್ಟಂತೆ ತಮ್ಮದೇ ಆದ ಮಾತುಗಳಲ್ಲಿ ಬರೆಯುವುದಕ್ಕೆ ಬೇಕಾದ ಸಾಮರ್ಥ್ಯ ಮತ್ತು ವಿಶ್ವಾಸವನ್ನು ನಿರ್ಮಿಸಲು ಅನೇಕ ವರ್ಷಗಳೇ ಬೇಕಾಗುತ್ತವೆ.

—-----------------------------------------------ಅಧ್ಯಾಯದಲ್ಲಿನ ಪ್ರತಿಯೊಂದು ವಿಭಾಗದ ಕೊನೆಯಲ್ಲಿ ಗ್ರಹಿಕೆ ಮತ್ತು ವಿಚಾರಪರತೆಗೆ ಸಂಬಂಧಿಸಿದ ಕೆಲವು ಪ್ರಶ್ನೆಗಳಿರುವ ಒಂದು ಪಠ್ಯಪಟ್ಟಿಗೆಯು ಇರುತ್ತಿತ್ತು. ಶಿಕ್ಷಕರು ಈ ವಿನ್ಯಾಸಕ್ಕೆ ಬಹಳ ಬೆಂಬಲ ನೀಡಿದರು, ಏಕೆಂದರೆ ಅದು ಅವರಿಗೆ ಗ್ರಹಿಕೆಯನ್ನು ಪರೀಕ್ಷಿಸಲು ಮತ್ತು ಯಾವ ಮುಖ್ಯ ವಿಚಾರಗಳನ್ನು ಎತ್ತಿ ಹಿಡಿಯಬೇಕಾಗಿತ್ತೋ ಅವುಗಳನ್ನು ಗಮನದಲ್ಲಿಟ್ಟುಕೊಳ್ಳಲು ಸಹ ನೆರವಾಗುತ್ತಿತ್ತು. ಹಾಗಿದ್ದರೂ ಒಬ್ಬ ಶಿಕ್ಷಕರು ಪ್ರಶ್ನೆಗಳತ್ತ ಬೊಟ್ಟು ಮಾಡಿ ಹೀಗೆ ಹೇಳಿದರು, ‘ನೀವು ಚಲನೆಗೆ ಅಡ್ಡಿ ಉಂಟು ಮಾಡುವಂತೆ ಸೃಷ್ಟಿಸಿರುವ ರಚನೆಗಳು- ವೇಗತಡೆಗಳು ತುಂಬಾ ಹೆಚ್ಚಾಗಿವೆ. ನೀವು ಅಧ್ಯಾಯದ ಚಲನೆಗೂ ಮತ್ತು ಪರೀಕ್ಷೆ ಮಾಡಲು ಮಧ್ಯದಲ್ಲಿರಿಸುವ ನಿಲುಗಡೆಗಳಿಗೂ ನಡುವೆ ಸಮತೋಲನವನ್ನು ಸ್ಥಾಪಿಸಬೇಕು’. ಇದು ಶಿಕ್ಷಕರುಗಳ ಅಭ್ಯಾಸದಿಂದ ಹೊರಹೊಮ್ಮಿದ ಸಂಗತಿಯಾಗಿದ್ದು, ಅದು ನಮ್ಮ ಅಧ್ಯಾಯಗಳನ್ನು ವಿನ್ಯಾಸ ಮಾಡುವ ಕಾರ್ಯಕ್ಕೆ ಮಾರ್ಗದರ್ಶಿ ತತ್ವವಾಯಿತು.ತರಗತಿಯ ವೀಕ್ಷಣೆಗಳು ತೋರಿಸಿದ್ದೇನೆಂದರೆ, ಬಹುತೇಕ ಗ್ರಹಿಕೆಯ ಮತ್ತು ವಿಚಾರ ಪರತೆಯ ಪ್ರಶ್ನೆಗಳನ್ನು ಮೌಖಿಕವಾಗಿ ತೆಗೆದುಕೊಳ್ಳಲಾಗಿತ್ತು. ಮತ್ತು ಅವು ಮಕ್ಕಳ ಭಾಗವಹಿಸುವಿಕೆಯನ್ನು ಮತ್ತು ಪಠ್ಯದೊಂದಿಗೆ ಅವರ ತೊಡಗುವಿಕೆಯನ್ನು ಹಾಗೂ ಅವರ ಸುತ್ತಲಿನ ಸಾಮಾಜಿಕ ಜಗತ್ತಿನ ಜೊತೆಗೆ ಅವರ ಕೊಂಡಿಗಳನ್ನು ಹೆಚ್ಚಿಸಿದವು. ಕೆಲವು ಪ್ರಶ್ನೆಗಳು ಶಿಕ್ಷಕರಿಗೆ ಸವಾಲೊಡ್ಡುತ್ತಿದ್ದವು. ಉದಾಹರಣೆಗೆ ಮತದಾರರ ಪಟ್ಟಿಯನ್ನು ಹೇಗೆ ತಯಾರಿಸಲಾಗುತ್ತದೆ ಎಂದು ವಿವರಿಸುವ ಪಠ್ಯಕ್ಕೆ ಸಂಬಂಧಿಸಿದಂತೆ ಒಂದು ಮಗು ಹೀಗೆ ಕೇಳಿತು, ‘ನಮ್ಮ ಕುಟುಂಬದ ಹೆಸರುಗಳನ್ನು ಹಳ್ಳಿಯಲ್ಲಿಯೂ ಮತ್ತು ನಗರದಲ್ಲಿಯೂ ನೋಂದಾಯಿಸಲಾಗಿದೆ. ನಮಗೆ ಎರಡು ಮನೆಗಳಿವೆ. ಇದರಲ್ಲಿ ತಪ್ಪೇನಿದೆ?’ ಶಿಕ್ಷಕರು ಅಪ್ರತಿಭರಾದರು. ಆದರೆ ವಿಚಾರವನ್ನು ತಿಳಿದುಕೊಂಡು ಹೇಳುತ್ತೇನೆಂದು ಮಾತು ಕೊಟ್ಟರು. ಒಂದು ದಶಕದ ಕಾಲ ಈ ಪಠ್ಯಕ್ರಮ ಮಾದರಿಯನ್ನು ಬೋಧಿಸಿದ ಶಿಕ್ಷಕರೊಬ್ಬರ ತರಗತಿ ಅನುಭವದ ಕುರಿತಾದ ಪುಸ್ತಕಗಳನ್ನು ನೀವು ಓದಿದರೆ, ಅದರಲ್ಲಿ ಅವರು ಮಕ್ಕಳು ತಮಗೆ ತರಗತಿಯಲ್ಲಿ ಕೇಳಿದ ಅನೇಕ ಪ್ರಶ್ನೆಗಳನ್ನು ಉಲ್ಲೇಖಿಸಿರುವುದನ್ನು ಕಾಣುತ್ತೀರಿ.( ನೋಡಿರಿ : ಪ್ರಕಾಶ್ ಕಾಂತ್). ಅವರ

ಪುಸ್ತಕದಲ್ಲಿನ ಒಂದು ಸ್ಮರಣಾರ್ಹ ಪ್ರಕರಣ ಹೀಗಿದೆ: ಅವರು ಭೂಮಿಯ ಗೋಳವನ್ನು ಪರಿಚಯಿಸಿದಾಗ ಬಂದದ್ದು ಪ್ರಶ್ನೆಗಳ ಸುರಿಮಳೆ. ವಿವರಣೆಯನ್ನು ಕೊಡಲು ಅವರು ಹೆಣಗಾಡುತ್ತಿದ್ದಾಗ ಒಂದು ಮಗು ಅವರನ್ನು ಕೇಳಿತು, 'ನಿಮಗೆ ಇದೆಲ್ಲಾ ಹೇಗೆ ಗೊತ್ತು? ನಿಮಗೆ ಇದನ್ನು ಯಾರು ಹೇಳಿದರು?' ಇನ್ನೊಂದು ಶಾಲೆಯಲ್ಲಿ ಶಿಕ್ಷಕರೊಬ್ಬರು ಹಿಂದೂ ಧರ್ಮದ ವಿವಿಧ ಸ್ವರೂಪಗಳನ್ನು ಪರಿಚಯಿಸುತ್ತಿದ್ದಾಗ, ಒಂದು ಮಗು ಹೀಗೆಂದಿತು: 'ನಾನು ದೇವರನ್ನು ನಂಬುವುದಿಲ್ಲ'. ಮತ್ತು ಇನ್ನೊಂದು ಮಗು ಆಗ ಉದ್ಗರಿಸಿತು, 'ಸರ್ ಇವನು ಹೇಗೆ ಉದ್ಧಾರವಾಗುತ್ತಾನೆ? (ಇವನಿಗೆ ಏನಾಗುತ್ತದೆ?)'.ಅನೇಕ ಯುವ ವಿದ್ಯಾರ್ಥಿಗಳು ನಮ್ಮ ತಂಡವನ್ನು 90ರ ದಶಕದ ಮಧ್ಯಭಾಗದಲ್ಲಿ ಸೇರಿಕೊಂಡಾಗ ಮೌಖಿಕತೆಯನ್ನು ಶೋಧಿಸುವ ಪ್ರಯತ್ನವು ಇನ್ನಷ್ಟು ಬಲಗೊಂಡಿತು ಈ ಅವಧಿಯಲ್ಲಿ ನಾವು ಪಠ್ಯಪುಸ್ತಕವನ್ನು ಪರಿಷ್ಕರಿಸಿದೆವು ಮತ್ತು ಪಠ್ಯಪುಸ್ತಕದಲ್ಲಿ ಅಡಕವಾಗಿರುವ ಪರಿಕಲ್ಪನಾತ್ಮಕ ಅಭಿವೃದ್ಧಿಯು (conceptual development) ವಾಸ್ತವದಲ್ಲಿ ನಡೆಯುತ್ತಿದೆಯೇ ಎಂಬ ಪ್ರಶ್ನೆಗೆ ಕುರಿತಂತೆ ಸಾಕ್ಷಿ ಪುರಾವೆಗಳನ್ನು ಸಂಗ್ರಹಿಸಲು ಆರಂಭಿಸಿದೆವು. (ನೋಡಿರಿ ರಶ್ಮಿ ಪಾಲಿವಾಲ್). ನಮಗೆ ಸಮೃದ್ಧ ಹಿನ್ನೆಲೆಯನ್ನು ಮತ್ತು ಶೋಧನೆ ಮಾಡಲು ಕೆಲವೊಂದು ಸೂಚನೆಗಳನ್ನು ಕೊಡಬಲ್ಲ, ಲಿಖಿತ ಉತ್ತರಗಳೊಂದಿಗಿದ್ದ ಪ್ರಶ್ನೆಗಳನ್ನು ಮತ್ತು ಮಕ್ಕಳೊಂದಿಗೆ ಮೌಖಿಕ ಚರ್ಚೆಗಳನ್ನು ವಿನ್ಯಾಸಗೊಳಿಸಿದೆವು.

ಮೌಖಿಕ ಚರ್ಚೆಗಳು ಮಕ್ಕಳ ಆಲೋಚನಾ ಪಥವನ್ನು ರೂಪಿಸಲು ಸಹ ನೆರವಾದವು. ನಮ್ಮ ಪಠ್ಯಗಳು ಕಥೆಗಳನ್ನು ಮತ್ತು ಪ್ರಕರಣ ಅಧ್ಯಯನಗಳನ್ನು ವಿಸ್ತಾರವಾಗಿ ಉಪಯೋಗಿಸಿಕೊಂಡವು. ಮಕ್ಕಳು ಸುಲಭವಾಗಿ ಕಥೆಯ ವಿವರಗಳಲ್ಲಿ ಮುಳುಗಿ ಹೋಗುತ್ತಿದ್ದರು. ಆದರೆ ಅವರು ನಿರ್ದಿಷ್ಟ ಕಥೆಯಿಂದ ಆಚೆಗೆ ಹೋಗಬಲ್ಲರೆ? ಮತ್ತು ಪಠ್ಯವು ತಾನು ರೂಪಿಸಲು ಪ್ರಯತ್ನಿಸುತ್ತಿರುವ ಅಮೂರ್ತತೆಯೊಂದಿಗೆ ಅವರು ಸಂಬಂಧವನ್ನು ಏರ್ಪಡಿಸಿಕೊಳ್ಳಬಲ್ಲರೆ?, ಇಂತಹ ಶೋಧನೆಗಳು ನಮಗೆ ಅಧ್ಯಾಯಗಳ ಕುರಿತು ಅವರ ಕಡೆಯಿಂದ ಬರುವ ಅಭಿಪ್ರಾಯಗಳನ್ನು ಒದಗಿಸಿದವು. ಮೌಖಿಕವಾಗಿ ಶೋಧಿಸಲ್ಪಟ್ಟ ಇನ್ನೊಂದು ಪ್ರಶ್ನೆಯೆಂದರೆ, ಮಕ್ಕಳಿಗೆ ಎಂಟನೇ ತರಗತಿಯ ಹಂತದಲ್ಲಿ ಇನ್ನೂ ಹೆಚ್ಚು ಸಂಕೀರ್ಣವಾದ ಪಠ್ಯಗಳೊಂದಿಗೆ ನಿಭಾಯಿಸುವುದು ಸಾಧ್ಯವೇ? ನಮಗೆ ಅಚ್ಚರಿ ತಂದ ಸಂಗತಿ ಏನೆಂದರೆ ಅವರು ಸಮಾಜದ ಅಮೂರ್ತ ಶಕ್ತಿ ಚಲನಶೀಲತೆಗಳನ್ನು ಅರ್ಥಮಾಡಿಕೊಳ್ಳಬಲ್ಲವರಾಗಿದ್ದರು, ಆದರೆ ಆಡಳಿತದ ಸಂರಚನೆಗಳು ಅವರ ಗ್ರಹಿಕೆಯ ಚೌಕಟ್ಟಿನಿಂದ ಹೊರಗಿರುವಂತೆ ಕಾಣುತ್ತಿತ್ತು. ತಡವಾಗಿ ಆದ ಈ ಮನವರಿಕೆಯಿಂದಾಗಿ ನಾವು ಒಂದು ಈಗ ಪ್ರಕಟಿತವಾಗಿರುವ ಅಧ್ಯಯನವೊಂದನ್ನು ಔಪಚಾರಿಕವಾಗಿ ಪೂರ್ಣಗೊಳಿಸಿದೆವು (ನೋಡಿರಿ: ಅಲೆಕ್ಸ್ ಎಂ ಜಾರ್ಜ್). ಪಠ್ಯಪುಸ್ತಕದೊಂದಿಗೆ ತೊಡಗಿಕೊಳ್ಳುವಿಕೆಯ ಬೌದ್ಧಿಕ ಭಾಗವು ವಿಸ್ತಾರವಾಗಿತ್ತು ಮತ್ತು ಅದು ತರಗತಿ ವಾಗ್ವಾದದ ಸಾವಯವ ಭಾಗವಾಯಿತು. ಆದರೆ ದುರದೃಷ್ಟವಶಾತ್ ನಾವು ಇದನ್ನು ಔಪಚಾರಿಕ ಮೌಲ್ಯಮಾಪನದ ಭಾಗವನ್ನಾಗಿ ಮಾಡಿಕೊಳ್ಳಲು ಆಗಲಿಲ್ಲ.

ಶಿಕ್ಷಕರಿಗಾಗಿ ಪ್ರಶ್ನೆಗಳ ಬ್ಯಾಂಕ್ ಸಂಗ್ರಹ

------------------------------

ನಮ್ಮ ತಂಡವನ್ನು ಸೇರಿದ್ದ ತರುಣ ವಿದ್ಯಾರ್ಥಿಗಳು ನಾವು ಶಿಕ್ಷಕರಿಗೆ ಅಭ್ಯಾಸದ ಪ್ರಶ್ನೆಗಳನ್ನು ಒದಗಿಸುವ ಅವಶ್ಯಕತೆ ಇದೆ ಎಂದು ಸಲಹೆ ನೀಡಿದರು. ಅವಶ್ಯಕ ಆತ್ಮವಿಶ್ವಾಸದೊಂದಿಗೆ ಸಹಜವಾಗಿ ಬರೆಯುವಂತೆ ಮಕ್ಕಳಿಗೆ ಮಾರ್ಗದರ್ಶನ ನೀಡಲು ಅಧ್ಯಾಯದ ಕೊನೆಯಲ್ಲಿ ಕೊಟ್ಟಿರುವ ಪ್ರಶ್ನೆಗಳು ಸಾಕಾಗುವುದಿಲ್ಲ ಎಂದು ಅವರಿಗೆ ಅನ್ನಿಸಿತ್ತು. ಇದಕ್ಕೂ ಮಿಗಿಲಾಗಿ ಶಿಕ್ಷಕರು, ವಿದ್ಯಾರ್ಥಿಗಳು ಬರೆದದ್ದನ್ನು ತಿದ್ದಿ ಮಾರ್ಗದರ್ಶನ ನೀಡುವ ಪದ್ಧತಿಯು ಇಲ್ಲಿ ಇರಲಿಲ್ಲ. ಇದನ್ನು ಮೀರಿ ಬರಲು ಇದ್ದ ಒಂದು ಮಾರ್ಗವೆಂದರೆ ಅಭ್ಯಾಸಕ್ಕಾಗಿ ಒಂದಷ್ಟು ಮುದ್ರಿತ ಪ್ರಶ್ನೆಗಳನ್ನು ಶಿಕ್ಷಕರಿಗೆ ಒದಗಿಸುವುದು. ವಿದ್ಯಾರ್ಥಿಗಳ ಅನಿಸಿಕೆಗಳನ್ನು ಶಿಕ್ಷಕರಿಗೆ ತಲುಪಿಸುವುದರಲ್ಲಿಯೂ ತಂಡವು ನೆರವು ನೀಡಿತು. ಪ್ರಶ್ನೆಗಳ ಬ್ಯಾಂಕ್ ಒಂದು ಹೊರಹೊಮ್ಮಲಾರಂಭಿಸಿತು.

ಪಠ್ಯಪುಸ್ತಕಗಳನ್ನು ಪರಿಷ್ಕರಿಸುವುದು

ವಿಜ್ಞಾನ ಕಾರ್ಯಕ್ರಮವು ಸ್ಥಾಪಿಸಿದ ಪ್ರಯೋಗಾಲಯದಿಂದ ಕ್ಷೇತ್ರದವರೆಗೆ ಎಂಬ ತತ್ವವನ್ನು ನಾವು ಅದೃಷ್ಟವಶಾತ್ ಅನುಸರಿಸಿದೆವು. ಆರಂಭದಲ್ಲಿ ತಯಾರಿಸಲಾದ ಪಠ್ಯಪುಸ್ತಕಗಳನ್ನು ಪ್ರಯೋಗಾಲಯದ ಮೂಲ ಮಾದರಿ ಎಂದು ಪರಿಗಣಿಸಲಾಗಿತ್ತು. ಶಾಲೆಯಲ್ಲಿನ ಕೆಲವು ವರ್ಷಗಳ ಅನುಭವವಾದ ನಂತರ ಅದನ್ನು ಪರಿಷ್ಕರಿಸುವುದು ಅಗತ್ಯವಾದ ಕಾರ್ಯವೈಖರಿ ಮಾದರಿ ಎಂದು ಪರಿಗಣಿಸಲಾಯಿತು. ಮೊದಲ

ಹಂತದ ಪ್ರತಿಕ್ರಿಯೆ ಬಂದದ್ದು ಶಿಕ್ಷಕರಿಂದ, ವಿಶೇಷವಾಗಿ ತರಬೇತಿ ಗೋಷ್ಠಿಗಳಲ್ಲಿ. ಅಲ್ಲಿ ಶಿಕ್ಷಕರ ಗ್ರಹಿಕೆಯ ಪ್ರಕಾರ ಸಾಮಾಜಿಕ ಸೂಕ್ಷ್ಮತೆ ಮತ್ತಿತರ ಅವಶ್ಯಕತೆಗಳನ್ನು ಅರ್ಥಮಾಡಿಕೊಳ್ಳಲು ಶಿಕ್ಷಕರು ಮತ್ತು ಪಠ್ಯಪುಸ್ತಕವನ್ನು ರಚಿಸುವ ತಂಡಗಳ ಮಧ್ಯೆ ಸಂವಾದವು ಬಹಳ ಮುಖ್ಯವಾಗಿತ್ತು. ಮತ್ತೊಂದು ಪ್ರತಿಕ್ರಿಯೆ ಬಂದದ್ದು ತಂಡವು ನಡೆಸಿದ ಕ್ಷೇತ್ರದ ಭೇಟಿಗಳಿಂದ ಮತ್ತು ತಂಡದ ತರಗತಿ ವೀಕ್ಷಣೆಗಳಿಂದ. ಮೂರನೆಯ ಹಂತವೆಂದರೆ, ಮಕ್ಕಳು ಬರೆದ ಉತ್ತರ ಪತ್ರಿಕೆಗಳ ವಿಶ್ಲೇಷಣೆಯಿಂದ. ಈಗಾಗಲೇ ಹೇಳಿರುವ ಹಾಗೆ ಪಠ್ಯಪುಸ್ತಕದಲ್ಲೇ ಇರುವ ದೌರ್ಬಲ್ಯಗಳನ್ನು ಸೂಚಿಸುವಂತಹ ವಿನ್ಯಾಸಗಳನ್ನು ಅಲ್ಲಿ ಗಮನಿಸಬಹುದಾಗಿತ್ತು. ಹೀಗೆ ವಿಭಿನ್ನ ಮೂಲಗಳಿಂದ ಬಂದ ಪ್ರತಿಕ್ರಿಯೆಗಳ ಮೂಲಕ ಪರಿಷ್ಕರಣೆಯ ವಿಷಯಗಳನ್ನು ಆತ್ಮವಿಶ್ವಾಸದೊಂದಿಗೆ ನಿರ್ವಹಿಸುವುದು ಸಾಧ್ಯವಾಯಿತು.

## ಸಾರಾಂಶ

ಅಭ್ಯಾಸ ಮತ್ತು ಮರು ಅಭ್ಯಾಸವು ಕೇವಲ ಮಕ್ಕಳಿಗೆ ಸೀಮಿತವಲ್ಲ. ಪಠ್ಯಪುಸ್ತಕಗಳು, ಶಿಕ್ಷಕರ ಸಿದ್ಧತೆ, ಮೌಲ್ಯಮಾಪನದ ಮಾದರಿ ಮತ್ತು ಶಾಲೆಯ ಸಂದರ್ಭ ಇವೆಲ್ಲವೂ ಕೂಡ ಭಿನ್ನ-ಭಿನ್ನ ಬದಲಾವಣೆಯಾಗುವ ಅಂಶಗಳಾಗಿರುತ್ತವೆ. ಮತ್ತು ಮಕ್ಕಳ ಅನುಭವವನ್ನು ತೆಗೆದುಕೊಂಡರೆ, ನಾವು ಮುಕ್ತ ಮನಸ್ಸಿನಿಂದ ಹೀಗೆ ಬದಲಾಗಬಹುದಾದ ವಿಭಿನ್ನ ಅಂಶಗಳನ್ನು ಎಲ್ಲ ಮಕ್ಕಳಿಗೂ ಕಲಿಕೆಯು ಹೆಚ್ಚು ಅನುಕೂಲಕರವಾಗುವಂತೆ ಮಾಡಲು ಹೇಗೆ ತಿದ್ದಬೇಕು ಎಂದು ಕೇಳಿಕೊಳ್ಳುವಂತಾಗಬೇಕು. “The Insider’s Narrative (ನೋಡಿರಿ: ಪೂನಂ ಬಾತ್ರ) ಎಂಬ ಪ್ರಬಂಧದ ಭಾಗವಾಗಿ ಬರೆಯುವುದು ಮತ್ತು ಪುಸ್ತಕಗಳನ್ನು ಪರಿಷ್ಕರಿಸುವುದು” ಎಂಬ ವಿಭಾಗದಲ್ಲಿ ನಾವು ಇದನ್ನು ವಿವರವಾಗಿ ಚರ್ಚಿಸಿದ್ದೇವೆ.
ಸಮಾಜ ವಿಜ್ಞಾನ ಕಾರ್ಯಕ್ರಮದ ದೀರ್ಘ ಇತಿಹಾಸದಲ್ಲಿ (1985- 2002), ಅಭ್ಯಾಸದ ಅಗತ್ಯವನ್ನು ಸತತವಾಗಿ ಪುನರುಚ್ಚರಿಸಲಾಯಿತು. ಈ ಮರು ಜ್ಞಾಪನೆಗಳು ಪಠ್ಯಕ್ರಮದ ಉದ್ದೇಶಗಳನ್ನು ಮತ್ತೆ ಮತ್ತೆ ಒತ್ತಿ ಹೇಳಿದವು. ಇದರ ಅಭ್ಯಾಸವು, ಕಾರ್ಯಕ್ರಮಕ್ಕೆ ಅಗತ್ಯವಾದ ಸಮರ್ಪಕವಾದ ಸಾಂಸ್ಕೃತಿಕ ವಾತಾವರಣವನ್ನು ನಿರ್ಮಿಸಿತು. ಅದೇನೇ ಇರಲಿ, ಮುಖ್ಯವಾದದ್ದೇನೆಂದರೆ ನಾವು ಅಭ್ಯಾಸಕ್ಕೆ ಏನು ಮಾಡಿದೆವು ಎಂಬುದಲ್ಲ, ಬದಲಿಗೆ ಪಠ್ಯಕ್ರಮದ ಉದ್ದೇಶಗಳ ಕುರಿತಾದ ಮುಕ್ತವಾದ ಮತ್ತು ಬಹು ಸಂಖ್ಯೆಯ ವಿಮರ್ಶೆಗಳು ಒಂದು ವಿಶಿಷ್ಟ ಸಾಮಾಜಿಕ ಸಂದರ್ಭದಲ್ಲಿ ಯಾವ ಅಭ್ಯಾಸದ ಮಾರ್ಗಗಳನ್ನು ಕೈಗೆತ್ತಿಕೊಳ್ಳಬೇಕು ಎಂಬುದರತ್ತ ಬೊಟ್ಟು ಮಾಡಿದವು ಎಂಬುದು.

ಕೃತಜ್ಞತೆಗಳು : ತಮ್ಮ ಮಾಜಿ ಸಹೋದ್ಯೋಗಿಗಳಾದ ರಾಮ್ ಮೂರ್ತಿ ಮತ್ತು ಸಂಜಯ್ ತಿವಾರಿ ಇವರಗಳನ್ನು ಅವರ ಕೊಡುಗೆಗಳಿಗಾಗಿ ಲೇಖಕರು ವಂದಿಸುತ್ತಾರೆ.

## ಕೊನೆಯ ಟಿಪ್ಪಣಿಗಳು

i. https://www.eklavya.in/past-work-top/programmes-past-top/social-science-programme
ii. https://www.eklavya.in/past- work-top/programmes-past-top/hstp

## ಪರಾಮರ್ಶನ

Alex M George, Children's Perception of Sarkar: A Critique of Civics Textbooks, Eklavya 2007
Batra Poonam edited, Social Science Learning in Schools: Perspectives and Challenges Sage 2010.
Prakash Kant, Samajik Adhyayan Navachar: Bacchon ke Sath Maine bhi Seekha Eklavya, 2021
Rashmi Paliwal, Assessment of Social Science in Schools – Our Experiences, Experiments and Learning, Learning Curve, August 2010

ಅರವಿಂದ್ ಸರ್ದಾನ ಅವರು ಏಕಲವ್ಯದ ಸಮಾಜ ವಿಜ್ಞಾನದ ತಂಡದಲ್ಲಿ ಅನೇಕ ವರ್ಷಗಳಿಂದ ಸದಸ್ಯರಾಗಿದ್ದಾರೆ. ಅವರು ಶೈಕ್ಷಣಿಕ ಸಂಶೋಧನೆ ಮತ್ತು ತರಬೇತಿಯ ರಾಷ್ಟ್ರೀಯ ಮಂಡಳಿಯಲ್ಲಿ ಮತ್ತು ಬೇರೆಬೇರೆ ರಾಜ್ಯ ಸರ್ಕಾರಗಳಲ್ಲಿ ಪಠ್ಯಕ್ರಮ ಅಭಿವೃದ್ಧಿ ಚಟುವಟಿಕೆಗಳೊಂದಿಗೆ ಭಾಗವಹಿಸಿದ್ದಾರೆ. ಅವರನ್ನು arvindewas@gmail.com ಮೂಲಕ ಸಂಪರ್ಕಿಸಬಹುದು.

ಅನುವಾದ : ಮಂಜುನಾಥ್ ಬಿ.ಆರ್.

ಪರಿಶೀಲನೆ : ಚಂದ್ರಶೇಖರ್ ಮಂಡೆಕೋಲು